# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 09ನೇ ಜುಲೈ, 2014
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹದಿಮೂರನೇ ಪಟ್ಟಿ**

**ಆ) ದಿನಾಂಕ 07.07.2014ರ ಹನ್ನೊಂದನೇ ಪಟ್ಟಿಯಿಂದ ವರ್ಗಾವಣೆಗೊಂಡ ಶ್ರೀ ಸಿ.ಎನ್. ಬಾಲಕೃಷ್ಣ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 156(1175) : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು**

**ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹದಿಮೂರನೇ ಪಟ್ಟಿ**

### 2. ಅರ್ಜಿಯನ್ನೊಪ್ಪಿಸುವುದು

ಶ್ರೀ ಎಸ್.ಸುರೇಶ್ ಕುಮಾರ್ (ಸದಸ್ಯರು, ಅರ್ಜಿಗಳ ಸಮಿತಿ) ಅವರು:-

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕಸವನಹಳ್ಳಿ ಗ್ರಾಮದ ಸರ್ವೆ ನಂ 8/2ರಲ್ಲಿನ ಜಮೀನಿನಲ್ಲಿ ಕಾನೂನು ಬಾಹಿರವಾಗಿ ಬಹುಅಂತಸ್ತುಗಳ ಕಟ್ಟಡಗಳನ್ನು ನಿರ್ಮಿಸಿರುವ ಬಗ್ಗೆ ಅರ್ಜಿಯನ್ನು ಒಪ್ಪಿಸುವುದು.

### 3. ವಿತ್ತೀಯ ಕಾರ್ಯಕಲಾಪಗಳು

2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮೇಲೆ ಮುಂದುವರೆದ ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
|---|---|
| 14 | ಕಂದಾಯ |

*ಪು.ತಿ.ನೋ.,*

**4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ**

1. ಶ್ರೀಯುತರುಗಳಾದ ಜಗದೀಶ್ ಶೆಟ್ಟರ, ಆರ್. ಅಶೋಕ್, ವಿಶ್ವೇಶ್ವರ ಹೆಗಡೆ ಕಾಗೇರಿ, ಬಸವರಾಜ ಬೊಮ್ಮಾಯಿ ಮತ್ತು ಗೋವಿಂದ ಎಂ.ಕಾರಜೋಳ ಹಾಗೂ ಇತರರು ಸಕಾಲದಲ್ಲಿ ಮಳೆ ಬಾರದೇ ರಾಜ್ಯದ ಹಲವು ಜಿಲ್ಲೆಗಳಲ್ಲಿ ಬರಗಾಲ ಆವರಿಸುತ್ತಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾಗಿದ್ದ ಮುಂಜಾಗ್ರತೆ ಕ್ರಮಗಳನ್ನು ಈವರೆಗೆ ಕೈಗೊಳ್ಳದಿರುವ ಬಗ್ಗೆ ಚರ್ಚೆ.

ಮತ್ತು

ಶ್ರೀಯುತರುಗಳಾದ ಬಿ.ಆರ್.ಪಾಟೀಲ್, ಹೆಚ್.ಕೆ. ಕುಮಾರಸ್ವಾಮಿ, ಕೆ.ಎಸ್. ಪುಟ್ಟಣ್ಣಯ್ಯ ಮತ್ತು ಎಸ್. ಚಿಕ್ಕಮಾದು ಅವರುಗಳು ರಾಜ್ಯದ 124 ತಾಲ್ಲೂಕುಗಳಲ್ಲಿ ಬರಗಾಲದಿಂದ ಕೃಷಿ ಕಾರ್ಮಿಕರು ಗೂಳೆ ಹೋಗುತ್ತಿದ್ದು ಮತ್ತು ಜಾನುವಾರುಗಳಿಗೆ ಮೇವು ಇಲ್ಲದೆ ತೊಂದರೆಯಾಗುತ್ತಿರುವ ಬಗ್ಗೆ ಚರ್ಚೆ.

2. ಶ್ರೀಯುತರುಗಳಾದ ಕೆ.ಆರ್. ರಮೇಶ್‌ಕುಮಾರ್, ಹೆಚ್.ವೈ. ಮೇಟಿ ಮತ್ತು ಎನ್. ಚಲುವರಾಯಸ್ವಾಮಿ ಅವರುಗಳು 2006 ಮತ್ತು 2007ರ ಆರ್ಥಿಕ ವರ್ಷದಿಂದ ಇಲ್ಲಿಯವರೆಗೆ ಕರ್ನಾಟಕ ರಾಜ್ಯದಲ್ಲಿರುವ ಸ್ವಯಂ ಸೇವಾ ಸಂಸ್ಥೆಗಳು ವಿದೇಶದಿಂದ 1069 ಕೋಟಿ ರೂ.ಗಳ ದೇಣಿಗೆಯನ್ನು ಪಡೆದು ವಿದೇಶಿ ವಿನಿಮಯ ನಿಯಂತ್ರಣ ಕಾಯ್ದೆ ಇತ್ಯಾದಿಯನ್ನು ಉಲ್ಲಂಘಿಸಿರುವ ಬಗ್ಗೆ ಚರ್ಚೆ

**5. ವಿತ್ತೀಯ ಕಾರ್ಯಕಲಾಪಗಳು**

2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಯ ಮಂಡನೆ ಹಾಗೂ ಚರ್ಚೆ.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
| --- | --- |
| 24 | ಇಂಧನ |

**6. ಗಮನ ಸೆಳೆಯುವ ಸೂಚನೆಗಳು**

1. ಶ್ರೀ ಎಸ್. ಅಂಗಾರ ಅವರು ಸುಳ್ಯ ವಿಧಾನಸಭಾ ಕ್ಷೇತ್ರದ ಪುತ್ತೂರು ತಾಲ್ಲೂಕಿನ ಕಾಣಿಯೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಬೆಳಂದೂರಿಗೆ ಸ್ಥಳಾಂತರಿಸಿರುವುದರಿಂದ ಕಾಣಿಯೂರಿನ ವಿದ್ಯಾರ್ಥಿಗಳಿಗೆ ತೊಂದರೆಯುಂಟಾಗಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

*ಪು.ತಿ.ನೋ.,*

2. ಶ್ರೀ ಎಂ.ಟಿ. ಕೃಷ್ಣಪ್ಪ ಅವರು ತುರುವೇಕೆರೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗುಬ್ಬಿ, ಸಿ.ಎಸ್.ಪುರ ಎಡಿಯೂರು ಗ್ರಾಮಗಳ ಮಾರ್ಗವಾಗಿ ಮಂಡ್ಯ ನಗರಕ್ಕೆ ಹೋಗುವ ರಸ್ತೆಯು ಕೆ-ಷಿಫ್ ಯೋಜನೆಯಡಿ ಮಂಜೂರಾಗಿದ್ದರೂ ಕಾಮಗಾರಿಯು ಪೂರ್ಣಗೊಳ್ಳದಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

3. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು ಗ್ರಾಮೀಣ ಪ್ರದೇಶದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಕಡಿಮೆ ಸೀಟುಗಳನ್ನು ಹಂಚಿಕೆ ಮಾಡಿರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವ ಬಗ್ಗೆ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

4. ಶ್ರೀ ಹೆಚ್.ಡಿ.ರೇವಣ್ಣ ಅವರು ಹಾಸನ ಜಿಲ್ಲೆ ಹೊಳೆನರಸೀಪುರ ಪಟ್ಟಣದಲ್ಲಿ ನಬಾರ್ಡ್ ಯೋಜನೆಯಡಿ ಹೆರಿಗೆ ಮತ್ತು ಮಕ್ಕಳ ಆಸ್ಪತ್ರೆ ಮಂಜೂರಾಗಿದ್ದು ಇನ್ನೂ ಕಟ್ಟಡ ನಿರ್ಮಾಣ ಕಾಮಗಾರಿಯು ಪ್ರಾರಂಭವಾಗದೆ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

5. ಶ್ರೀ ಎ. ಮಂಜು ಅವರು ಹೊಳೆನರಸೀಪುರ ತಾಲ್ಲೂಕಿನ ಹಳೆ ಮೈಸೂರಿನ ಹೋಬಳಿಗೆ ಸೇರಿದ ಸಿಂಗನಗುಪ್ಪೆ ಗ್ರಾಮದ ಇಬ್ಬರು ಶಾಲಾ ಮಕ್ಕಳು ಕಳೆದ ಮೂರು ದಿನಗಳಿಂದ ಕಾಣೆಯಾಗಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

6. ಶ್ರೀ ರಮೇಶ್ ಬಾಳಪ್ಪ ಭೂಸನೂರು ಅವರು ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಆಲಮೇಲ್ ಹೋಬಳಿಯನ್ನು ತಾಲ್ಲೂಕನ್ನಾಗಿ ಘೋಷಣೆ ಮಾಡುವ ಬಗ್ಗೆ ಕಂದಾಯ ಸಚಿವರ ಗಮನ ಸೆಳೆಯುವುದು.

7. ಶ್ರೀ ಎಸ್.ಆರ್. ವಿಶ್ವನಾಥ ಅವರು ರಾಜ್ಯದಲ್ಲಿ ಹೆರಿಟೇಜ್, ದೊಡ್ಲ, ತಿರುಮಲ, ಆರೋಗ್ಯ ಸೇರಿದಂತೆ ಇನ್ನಿತರ ಖಾಸಗಿ ಡೈರಿಗಳ ಪೈಕಿ ಹಲವು ಡೈರಿಗಳು ಕಳಪೆ ಗುಣಮಟ್ಟದ ಹಾಲನ್ನು ಪೂರೈಸುತ್ತಿರುವ ಬಗ್ಗೆ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರ ಗಮನ ಸೆಳೆಯುವುದು.

8. ಶ್ರೀ ಕೆ.ಎಂ. ತಿಮ್ಮರಾಯಪ್ಪ ಅವರು ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕು ವೈ.ಎಸ್. ಹೊಸಕೋಟೆ ಪಟ್ಟಣದ ಹಳೇ ಪೋಲೀಸ್ ಕ್ವಾರ್ಟರ್ಸ್ ಹತ್ತಿರ ಚರಂಡಿ ನಿರ್ಮಾಣದ ಕಾಮಗಾರಿಯನ್ನು ನಿರ್ವಹಿಸಲು ಪೋಲೀಸ್ ಇಲಾಖೆಯವರು ಅಡ್ಡಪಡಿಸುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

9. ಶ್ರೀ ಪ್ರಮೋದ್ ಮಧ್ವರಾಜ್ ಅವರು ಉಡುಪಿ ಜಿಲ್ಲೆಯ ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯಗಳಲ್ಲಿ ವಿಮೆದಾರರ ವೈದ್ಯಕೀಯ ವೆಚ್ಚ ಪಾವತಿ ಬಾಕಿ ಇರುವ ಬಗ್ಗೆ ಮಾನ್ಯ ಕಾರ್ಮಿಕ ಸಚಿವರ ಗಮನ ಸೆಳೆಯುವುದು.

***ಪು.ತಿ.ನೋ.,***

10. ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ಅವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ನೀರು ಪೂರೈಕೆ ಯೋಜನೆಗಳಿಗಾಗಿ ಕೇಂದ್ರದಿಂದ ಬಿಡುಗಡೆಯಾದ ಅನುದಾನದಲ್ಲಿ ಭಾಗಶ: ಅನುದಾನವನ್ನು ಉತ್ತರ ಕನ್ನಡ ಜಿಲ್ಲೆಯಿಂದ ಬೇರೆ ಜಿಲ್ಲೆಗೆ ವರ್ಗಾಯಿಸಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

11. ಕೆ.ಬಿ. ಪ್ರಸನ್ನ ಕುಮಾರ್ ಅವರು ಶಿವಮೊಗ್ಗ ನಗರದ ಪುರಾತನ ದೇವಸ್ಥಾನವಾದ ಶ್ರೀ ಕೋಟೆ ಆಂಜನೇಯ ದೇವಸ್ಥಾನದಲ್ಲಿದ್ದ ಪಾಕ ಶಾಲೆಯನ್ನು ಹೊಸದಾಗಿ ಕಟ್ಟಲು ಪ್ರಾಚ್ಯ ವಸ್ತು ಸಂಗ್ರಹದ ಇಲಾಖೆಯ ಅಧಿಕಾರಿಗಳು ಬಿಡದಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

12. ಶ್ರೀ ಎನ್. ಚಲುವರಾಯಸ್ವಾಮಿ ಅವರು ನಾಗಮಂಗಲ ತಾಲ್ಲೂಕಿನಲ್ಲಿ ಕುಡಿಯುವ ನೀರಿನ ಅಭಾವವಿರುವುದರಿಂದ ನಾಗಮಂಗಲ ತಾಲ್ಲೂಕು ಕೆರೆಗಳಿಗೆ ಹೇಮಾವತಿ ಜಲಾಶಯದ ನಾಲೆಯ ಮೂಲಕ ನೀರು ತುಂಬಿಸುವ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

13. ಶ್ರೀ ಜಿ.ಎಸ್. ಪಾಟೀಲ್ ಅವರು ಗದಗ ಜಿಲ್ಲೆ ರೋಣ ತಾಲ್ಲೂಕು ನರೇಗಲ್ ಹೋಬಳಿ ಗಜೇಂದ್ರಗಡ ವಿಶೇಷ ತಹಶೀಲ್ದಾರ್ ವ್ಯಾಪ್ತಿಯಲ್ಲಿ ವೃದ್ಧಾಪ್ಯ/ ವಿಧವಾ/ ಅಂಗವಿಕಲ/ ಸಂಧ್ಯಾ ಸುರಕ್ಷಾ ಮಾಸಶಾನ ಯೋಜನೆಗಳ ಸುಮಾರು ೫೦೦ ಅರ್ಹ ಫಲಾನುಭವಿಗಳಿಗೆ ಮಾಸಶಾನನ್ನು ರದ್ದುಗೊಳಿಸಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

14. ಶ್ರೀ ಜೆ.ಆರ್. ಲೋಬೋ ಅವರು ಮಂಗಳೂರು ತಾಲ್ಲೂಕು ಕಸಬಾ ಬೆಂಗ್ರೆ ಮತ್ತು ತೋಟ ಬೆಂಗ್ರೆಯಲ್ಲಿ ಬಡ ಮೀನುಗಾರರು ಸುಮಾರು ೬೦ ವರ್ಷಗಳಿಂದ ಮನೆಗಳನ್ನು ಕಟ್ಟಿಕೊಂಡು ವಾಸವಿರುವುದರಿಂದ ಅವರುಗಳಿಗೆ ನಿವೇಶನವನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

15. ಶ್ರೀಮತಿ ಶಾರದಾ ಮೋಹನ ಶೆಟ್ಟಿ ಅವರು ರಾಜ್ಯದ ಗ್ರಾಮೀಣ ಭಾಗದಲ್ಲಿ ಸಂಚಾರಿ ಆರೋಗ್ಯ ಘಟಕಗಳ ಸೇವೆಯನ್ನು ಆರೋಗ್ಯ ಇಲಾಖೆಯು ಸ್ಥಗಿತಗೊಳಿಸಿರುವುರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)